# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 336 |
| 2 | ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 10-12-2020 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಮಹಾನಗರದಲ್ಲಿ ಬಹು ಮಹಡಿ ಕಟ್ಟಡಗಳಿಗೆ ವಾಸ ಯೋಗ್ಯ ಪ್ರಮಾಣ ಪತ್ರ ನೀಡುವ ಸಮಯದಲ್ಲಿ ಅಗ್ನಿಶಾಮಕ ದಳದಿಂದ ನಿರಾಕ್ಷೇಪಣಾ ಪತ್ರವನ್ನು ಪಡೆಯುವುದನ್ನು ಕಡ್ಡಾಯಗೊಳಿಸಲಾಗಿದೆಯೇ: | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಬಹುಮಹಡಿ ಕಟ್ಟಡಕ್ಕೆ ನಕ್ಷೆ ಮಂಜೂರಾತಿ ನೀಡುವ ಸಮಯದಲ್ಲಿ ಕಟ್ಟಡ ಮಾಲೀಕರು / ಅಭಿವೃದ್ಧಿದಾರರು ಅಗ್ನಿಶಾಮಕ ಇಲಾಖೆಯಿಂದ ನಿರಾಕ್ಷೇಪಣಾ ಪತ್ರವನ್ನು (Fire NOC) ಪಡೆಯುವುದು ಕಡ್ಡಾಯಗೊಳಿಸಲಾಗಿರುತ್ತದೆ ಹಾಗೂ ಅಗ್ನಿಶಾಮಕ ಇಲಾಖೆಯಿಂದ ಕ್ಲಿಯರೆನ್ಸ್ ಪತ್ರ (Fire Clearance) ನೀಡಿದ ನಂತರವೇ ಪಾಲಿಕೆಯಿಂದ ಬಹುಮಹಡಿ ಕಟ್ಟಡಗಳಿಗೆ ವಾಸಯೋಗ್ಯ ಪ್ರಮಾಣ ಪತ್ರಗಳನ್ನು ನೀಡಲಾಗುತ್ತದೆ. |
| ಆ) | ವಾಸ ಯೋಗ್ಯ ಪ್ರಮಾಣಪತ್ರ ಪಡೆದ ಬಳಿಕ ಅಗ್ನಿ ಶಾಮಕ ವಾಹನವು ಓಡಾಡಲು ನಿಗಧಿಪಡಿಸಿದ ಜಾಗದಲ್ಲಿ ಬಹುಮಹಡಿ ಕಟ್ಟಡಗಳು, ಪಾರ್ಕ್, ಜಿಮ್ ಮುಂತಾದ ಶಾಶ್ವತ ಕಾಮಗಾರಿಗಳ ಮೂಲಕ ಸೌಲಭ್ಯಗಳನ್ನು ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಈ ಅಕ್ರಮ ನಿರ್ಮಾಣಗಳನ್ನು ತೆರವುಗೊಳಿಸಲು ಅಥವಾ ಈಗಾಗಲೇ ನೀಡಿರುವ ವಾಸಯೋಗ್ಯ ಪ್ರಮಾಣ ಪತ್ರವನ್ನು ಹಿಂಪಡೆಯಲು ಸರ್ಕಾರ ಕ್ರಮಕೈಗೊಂಡಿದೆಯೇ: | ಅಗ್ನಿಶಾಮಕ ಇಲಾಖೆಯಿಂದ ಕ್ಲಿಯರೆನ್ಸ್ ಪತ್ರ (Fire Clearance) ಪಡೆದು ಪಾಲಿಕೆಯಿಂದ ಬಹುಮಹಡಿ ಕಟ್ಟಡಗಳಿಗೆ ವಾಸಯೋಗ್ಯ ಪ್ರಮಾಣ ಪತ್ರ ಪಡೆದ ನಂತರ, ಅಗ್ನಿ ಶಾಮಕ ಇಲಾಖೆಯವರು ನಿಯಮಾನುಸಾರ ಪರಿಶೀಲನೆ ನಡೆಸಿ ನವೀಕರಿಸಿದ ಕ್ಲಿಯರೆನ್ಸ್ ಪ್ರಮಾಣಪತ್ರವನ್ನು ನೀಡಬೇಕಾಗಿರುತ್ತದೆ.<br><br>ನಗರ ಯೋಜನೆ ವಿಭಾಗದಿಂದ ವಾಸಯೋಗ್ಯ ಪ್ರಮಾಣಪತ್ರವನ್ನು ನೀಡಿದ ನಂತರ ಯಾವುದೇ ವಾಸಯೋಗ್ಯ ಪ್ರಮಾಣಪತ್ರವನ್ನು ಹಿಂಪಡೆದಿರುವುದಿಲ್ಲ. |
| ಇ) | ಇದುವರೆಗೆ ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಎಷ್ಟು ಬಹು ಮಹಡಿ ಕಟ್ಟಡಗಳ ವಾಸಯೋಗ್ಯ ಪ್ರಮಾಣಪತ್ರವನ್ನು ರದ್ದುಗೊಳಿಸಲಾಗಿದೆ: ಎಷ್ಟು ಬಹುಮಹಡಿ ಕಟ್ಟಡಗಳನ್ನು ವಾಸಯೋಗ್ಯ ಪ್ರಮಾಣಪತ್ರ ನೀಡಿದ ಬಳಿಕ ಪರಿಶೀಲನೆ ನಡೆಸಲಾಗಿದೆ: (ವಿವರ ನೀಡುವುದು) | ನಗರ ಯೋಜನೆ ವಿಭಾಗದಿಂದ ಯಾವುದೇ ವಾಸಯೋಗ್ಯ ಪ್ರಮಾಣಪತ್ರವನ್ನು ರದ್ದುಪಡಿಸಿರುವುದಿಲ್ಲ.<br><br>ವಾಸಯೋಗ್ಯ ಪ್ರಮಾಣಪತ್ರವನ್ನು ನೀಡಿದ ನಂತರ ಪರಿಶೀಲನೆ ನಡೆಸಲು ಸಂಬಂಧಪಟ್ಟ ವಿಭಾಗಗಳ ಕಾರ್ಯಪಾಲಕ ಅಭಿಯಂತರರುಗಳಿಗೆ ಮತ್ತು ಉಪ ವಿಭಾಗಗಳ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರುಗಳಿಗೆ ಅಧಿಕಾರ |

| | | |
|---|---|---|
| | | ಪ್ರತ್ಯಾಯೋಜನೆ ಮಾಡಲಾಗಿರುತ್ತದೆ. ವಲಯ ಮುಖ್ಯ ಅಭಿಯಂತರರು ರವರುಗಳಿಂದ ವಾಸಯೋಗ್ಯ ಪ್ರಮಾಣಪತ್ರ ನೀಡಿದ ಬಳಿಕ ಪರಿಶೀಲನೆ ನಡೆಸಿದ ಯಾವುದೇ ವರದಿಯು ಸ್ವೀಕೃತವಾಗಿರುವುದಿಲ್ಲ. |
| ಈ) | ಬೆಂಗಳೂರು ನಗರದಲ್ಲಿ ಅಧಿಕಾರಿಗಳು ಲಂಚ ಪಡೆದು ವಾಸಯೋಗ್ಯ ಪ್ರಮಾಣಪತ್ರ (ಓ.ಸಿ) ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಈ ಕುರಿತು ಎಷ್ಟು ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ? | ಬಂದಿರುವುದಿಲ್ಲ. |

**ನಅಇ 384 ಎಂಎನ್‌ಯು 2020**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ